# ಕರ್ನಾಟಕ ವಿಧಾನ ಪರಿಷತ್ತು

01. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 542

02. ಮಾನ್ಯ ಸದಸ್ಯರ ಹೆಸರು : ಡಾ|| ತೇಜಸ್ವಿನಿ ಗೌಡ (ವಿಧಾನ ಸಭೆಯಿಂದ ಚುನಾಯಿತರಾದವರು)

03. ಉತ್ತರಿಸುವ ದಿನಾಂಕ : 16-12-2021

04. ಉತ್ತರಿಸುವ ಸಚಿವರು : ಗೃಹ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಸಶಕ್ತವಾಗಿ ಅಪರಾಧ ತಡೆ ಕ್ರಮಕ್ಕಾಗಿ ಸಿಬ್ಬಂದಿಗೆ ಯಾವ ರೀತಿಯ ಆಧುನಿಕ ತರಬೇತಿ ನೀಡಲಾಗುತ್ತಿದೆ : | ಪೊಲೀಸ್ ಸಿಬ್ಬಂದಿಗಳಿಗೆ ಪೊಲೀಸ್ ಮ್ಯಾನುಯಲ್ ಮತ್ತು ಸ್ಥಾಯಿ ಆದೇಶ ಸಂಖ್ಯೆ: 1017ರಲ್ಲಿ ಸಿಬ್ಬಂದಿಗಳು ಅಪರಾಧಗಳನ್ನು ತಡೆಯುವಲ್ಲಿ ಸಂಗ್ರಹಿಸಬೇಕಾಗಿರುವ ಗುಪ್ತ ಮಾಹಿತಿ ಮತ್ತು ಅವರು ಗಸ್ತಿನಲ್ಲಿ ನಿರ್ವಹಿಸಬೇಕಾದ ಕರ್ತವ್ಯಗಳು ಮತ್ತು ಬಾತ್ಮಿದಾರರುಗಳನ್ನು ಮಾಡಿಕೊಳ್ಳುವ ವಿಧಾನಗಳು ಮತ್ತು ಆಧುನಿಕವಾಗಿ ಮೊಬೈಲ್ ಟವರ್ ಡಂಪ್, ಸಿಡಿಆರ್ ಅನಾಲಿಸಿಸ್ ಮತ್ತು ಸೈಬರ್ ಅಪರಾಧಗಳ ಬಗ್ಗೆ, ಐ.ಟಿ ಆಕ್ಟ್ ಮತ್ತು ಪತ್ರಿಕೆ-7ರಲ್ಲಿ ಅಪರಾಧ ಪತ್ತೆಗಾಗಿ ವೈಜ್ಞಾನಿಕ ಮತ್ತು ತಾಂತ್ರಿಕತೆಯ ಬಳಕೆಯ ವಿಷಯವನ್ನು ಮತ್ತು ಲಿಂಗ ಸಮಾನತೆ ಮತ್ತು ತಾರತಮ್ಯ ನಿಷೇಧದ ಬಗ್ಗೆ ತರಬೇತಿ ನೀಡಲಾಗುತ್ತಿದೆ.<br><br>ಪಿಎಸ್ಐ ಪ್ರತಿ ಶಿಕ್ಷಣಾರ್ಥಿಗಳಿಗೆ ಅಪರಾಧ ತಡೆಗಟ್ಟುವ ಬಗ್ಗೆ ಅಪರಾಧ ತಡೆ ಎನ್ನುವ ವಿಷಯವನ್ನು ಅಳವಡಿಸಿಕೊಳ್ಳಲಾಗಿದೆ, ಈ ವಿಷಯಗಳಲ್ಲಿ ಬೀಟ್‌ಗಳನ್ನು ಜಾರಿ ಮಾಡಿ ಅಪರಾಧ ತಡೆಗಟ್ಟುವ ಬಗ್ಗೆ ಈ-ಬಿಟ್ ಅಳವಡಿಸಿಕೊಳ್ಳುವ ಬಗ್ಗೆ ಕರ್ನಾಟಕ ಸಾರ್ವಜನಿಕ ಸುರಕ್ಷತಾ ಅಧಿನಿಯಮ 2017ರ ಪ್ರಕಾರ ಸಾರ್ವಜನಿಕರು ಸಿಸಿಟಿವಿ ಅಳವಡಿಸಿಕೊಂಡು ಅಪರಾಧ ತಡೆಗಟ್ಟಲು ಕೈಗೊಳ್ಳುವ ಬಗ್ಗೆ ಮತ್ತು ಇತರೆ ಅಪರಾಧಗಳನ್ನು ತಡೆಗಟ್ಟಲು ಕಾನೂನು ಅಡಿಯಲ್ಲಿ ಕೈಗೊಳ್ಳುವ ಮುಂಜಾಗ್ರತ ಕ್ರಮಗಳ ಬಗ್ಗೆ ವಿಸ್ತಾರವಾದ ತರಬೇತಿಯನ್ನು ನೀಡಲಾಗುತ್ತದೆ, ಹಾಗೂ ಆಧುನಿಕ ಶಸ್ತ್ರಾಸ್ತ್ರಗಳನ್ನು ಉಪಯೋಗಿಸುವ ಬಗ್ಗೆ ಪ್ರಾಯೋಗಿಕವಾಗಿ ಗುಂಡು-ಗುರಿ ಅಭ್ಯಾಸವನ್ನು ಕಾಲಕಾಲಕ್ಕೆ ತರಬೇತಿ ಮುಖಾಂತರ ನೀಡಲಾಗುತ್ತಿದೆ. ವಿಷಯಗಳ ಪಟ್ಟಿ ಕೆಳಕಂಡಂತಿರುತ್ತದೆ. |

| | | |
|---|---|---|
| | | 1) Criminal Procedure Code<br>2) Crime Detection & Investigation-I<br>3) Crime Detection & Investigation-II<br>4) Cyber Crime & Investigation<br>5) Crime Simulation (Practical)<br>6) Model Police Station (Practical)<br>7) Moot Court (Practical)<br>8) Scenario Based Training |
| ಆ) | ನಾಗರೀಕರೊಂದಿಗೆ ಸೌಹಾರ್ದಯುತ ನಡವಳಿಕೆ ಮಹತ್ವ ಕುರಿತು ಯಾವ ರೀತಿಯ ತರಬೇತಿಯನ್ನು ಪೊಲೀಸರಿಗೆ ನೀಡಲಾಗುತ್ತಿದೆ | ನೇಮಕಗೊಳ್ಳುವ ಸಿವಿಲ್ ಪೊಲೀಸ್ ಕಾನ್ಸ್‌ಟೇಬಲ್‌ಗಳ ಆಧುನಿಕ ಪಠ್ಯ ಕ್ರಮದಲ್ಲಿ ಸೈಕಾಲಜಿ ಮತ್ತು ಕ್ರಿಮಿನಾಲಜಿ ವಿಷಯದಲ್ಲಿ ಪೊಲೀಸರು ಸಾರ್ವಜನಿಕರೊಂದಿಗೆ, ಮಾದ್ಯಮದವರೊಂದಿಗೆ, ನಾಗರೀಕರೊಂದಿಗೆ ಮತ್ತು ಇತರೆ ಇಲಾಖೆಯವರೊಂದಿಗೆ ಯಾವ ರೀತಿಯ ವರ್ತನೆ ಮಾಡಬೇಕೆಂದು ಒಟ್ಟು 50 ಗಂಟೆಗಳ ಪಠ್ಯಕ್ರಮವಿದ್ದು, ಹೊರಗಿನಿಂದ ನುರಿತ ಪ್ರಾಧ್ಯಾಪಕರುಗಳನ್ನು ಮತ್ತು ಮನ:ಶಾಸ್ತ್ರಜ್ಞರನ್ನು ಹಾಗೂ ಮನೋರೋಗ ವೈದ್ಯರನ್ನು ಕರೆಸಿ ತರಗತಿಗಳನ್ನು ಡಿ.ಜಿಪಿ ತರಬೇತಿ ರವರ ಮುಖಾಂತರ ನೀಡಲಾಗುತ್ತಿದೆ.<br><br>ಬುನಾದಿ ತರಬೇತಿ ಅವಧಿಯಲ್ಲಿ ಪ್ರತಿ ಶಿಕ್ಷಣಾರ್ಥಿಗಳಿಗೆ ನಾಗರೀಕರೊಂದಿಗೆ ಸೌಹಾರ್ದಯುತವಾಗಿ ನಡೆದುಕೊಳ್ಳುವ ಬಗ್ಗೆ ಅತಿಥಿ ಉಪನ್ಯಾಸಕರುಗಳಿಂದ ಈ ಕೆಳಕಂಡ ವಿಷಯಗಳ ಕೌಶಲ್ಯತೆಯ ಬಗ್ಗೆ ತರಬೇತಿ ಯನ್ನು ಸಹ ನೀಡಲಾಗುತ್ತಿದೆ.<br>1) Soft Skill<br>2) Body Language<br>3) Communication Skill<br>4) Stress Management<br>5) Interactive Skill<br>6) Multi Language Skill<br>7) Mind Management Skill<br>8) Behavior & Ethic towards public<br>9) Public Behavior towards Senior Citizen, Children & Youth<br>10) Peace Committee with various Religious Institutions |

| | | |
|---|---|---|
| ಇ) | ಮಹಿಳೆಯರ ಮೇಲಿನ ಅಪರಾಧ ತಡೆ ಹಾಗೂ ತನಿಖೆ ಸಂಧರ್ಭದಲ್ಲಿ ಸಿಬ್ಬಂದಿಯ ಸಂವೇಧನಶೀಲತೆ ಹೆಚ್ಚಿಸುವ ಮೂಲಕ ಕಾರ್ಯ ಕ್ಷಮತೆ ಹೆಚ್ಚಿಸಲು ಯಾವ ರೀತಿಯ ವಿಶೇಷ ತರಬೇತಿ ಕಾರ್ಯಕ್ರಮ ಹಮ್ಮಿಕೊಳ್ಳಲಾಗಿದೆ. | ಮಹಿಳೆಯರು ಮತ್ತು ಮಕ್ಕಳ ಮೇಲಿನ ದೌರ್ಜನ್ಯಕ್ಕೆ ಸಂಬಂದಪಟ್ಟಂತೆ IPC, POCSO, ಬಾಲ ಕಾರ್ಮಿಕ ನ್ಯಾಯ ಮಂಡಳಿ, ಬಾಲ್ಯ ವಿವಾಹ ಕಾಯ್ದೆ, ವರದಕ್ಷಿಣೆ ನಿಷೇಧ ಕಾಯ್ದೆ ಇತ್ಯಾದಿ ವಿಷಯಗಳ ಬಗ್ಗೆ ಸಿವಿಲ್ ಪೊಲೀಸ್ ಕಾನ್ಸ್‌ಟೇಬಲ್‌ಗಳ ಪಠ್ಯ ಕ್ರಮದಲ್ಲಿ ವಿವರವಾಗಿ ತಿಳಿಸುತ್ತಿದ್ದು ನಂತರ ವಿವಿಧ ಸ್ವಸಹಾಯ ಸಂಘಗಳ ಮತ್ತು ಜಿಲ್ಲಾ ಮಕ್ಕಳ ರಕ್ಷಣಾ ಘಟಕ, ಜಿಲ್ಲಾ ಬಾಲ ನ್ಯಾಯ ಮಂಡಳಿ, ಜಿಲ್ಲಾ ಸಾಂತ್ವಾನ ಕೇಂದ್ರ ಮತ್ತು ಇತರೆ ಸಂಘ ಸಂಸ್ಥೆಗಳಿಂದ ನುರಿತ ಉಪನ್ಯಾಸಕರುಗಳಿಂದ ತರಬೇತಿಯನ್ನು ನೀಡಲಾಗುತ್ತಿದೆ. |
| ಈ) | ನ್ಯಾಯಾಲಯಗಳಲ್ಲಿ ಅಪರಾಧ ಸಾಬೀತುಪಡಿಸುವ ನಿಟ್ಟಿನಲ್ಲಿ ಎಫ್.ಐ.ಆರ್ ಮತ್ತು ಚಾರ್ಜ್ ಶೀಟ್ ಬರೆಯುವಾಗ ಕಾನೂನಿನ ನೈಪುಣ್ಯತೆ ಬಗ್ಗೆ ಠಾಣಾ ಬರಹಗಾರರಿಗೆ (Right) ವಿಶೇಷ ತರಬೇತಿ ನೀಡಲಾಗುತ್ತಿದೆಯೇ ? | ಸಿವಿಲ್ ಪೊಲೀಸ್ ಕಾನ್ಸ್‌ಟೇಬಲ್‌ಗಳ ಪಠ್ಯ ಕ್ರಮದ ಪತ್ರಿಕೆ–5 ರಲ್ಲಿ ಸಿಆರ್‌ಪಿಸಿ ಕಲಂ 154 ರಿಂದ 176 ರವರೆಗೆ ಮತ್ತು ಭಾರತ ಸಾಕ್ಷ್ಯ ಅಧಿನಿಯಮದ ಸೆಕ್ಷನ್ 25, 26, 27, 32(1) 45 ಮತ್ತು ಮಹಿಳಾ ಮತ್ತು ಮಕ್ಕಳ ಬಗ್ಗೆ ಇರುವ ವಿಶೇಷ ಮತ್ತು ಸ್ಥಳೀಯ ಕಾನೂನುಗಳನ್ನು ಹಾಗೂ ಐಪಿಸಿ ದಂಡ ಸಂಹಿತೆಯ ಇತ್ಯಾದಿಗಳ ಬಗ್ಗೆ ಮತ್ತು ತನಿಖೆಯನ್ನು ಕೈಗೊಳ್ಳುವ ವಿಧದ ಬಗ್ಗೆ ನುರಿತ ಪೊಲೀಸ್ ಅಧಿಕಾರಿಗಳು ಮತ್ತು ನುರಿತ ಸರ್ಕಾರಿ ಅಭಿಯೋಜಕರು ಮತ್ತು ಖಾಸಗಿ ವಕೀಲರುಗಳಿಂದ ಉಪನ್ಯಾಸವನ್ನು ನೀಡಲಾಗುತ್ತಿದೆ ಮತ್ತು ಅದಕ್ಕೆ ಸಂಬಂದಿಸಿದ ನಮೂನೆಗಳನ್ನು ಖುದ್ದಾಗಿ ಪೊಲೀಸ್ ಪ್ರಶಿಕ್ಷಣಾರ್ಥಿಗಳಿಂದಲೇ ಬರೆಯುವಂತಹ ಪ್ರಾಜೆಕ್ಟ್ ವರ್ಕ್‌ಗಳನ್ನು ನೀಡಲಾಗುತ್ತಿದೆ. |

ಹೆಚ್‌ಡಿ 44 ಪಿಸಿಕ್ಯೂ 2021

(ಆರಗ ಜ್ಞಾನೇಂದ್ರ)
ಗೃಹ ಸಚಿವರು.